ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ರಾಜ್ಯದಲ್ಲಿ ಸಹಕಾರಿ ಬ್ಯಾಂಕ್‌ಗಳು ವಂಚನೆ ಮಾಡುತ್ತಿರುವ ಕುರಿತು

ಶ್ರೀ ಆರ್.ಬಿ. ತಿಮ್ಮಾಪೂರ (ವಿಧಾನ ಸಭೆಯಿಂದ ಚುನಾಯಿತರಾದವರು):-

975(1073) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸಹಕಾರ ಇಲಾಖಾ ವ್ಯಾಪ್ತಿಗೆ ಒಳಪಡುವ ವಿವಿಧ ದರ್ಜೆಯ ಸಹಕಾರಿ ಬ್ಯಾಂಕ್‌ಗಳ ಸಂಖ್ಯೆ ಎಷ್ಟು ; (ಜಿಲ್ಲಾವಾರು ಸಂಖ್ಯಾ ವಿವರಗಳನ್ನು ನೀಡುವುದು)

(ಆ) ಇಂತಹ ಸಹಕಾರಿ ಬ್ಯಾಂಕ್‌ಗಳು ಸದಸ್ಯರು/ಖಾತೆದಾರರು/ಸಾಲ ಪಡೆದುಕೊಂಡವರಿಗೆ ಮೋಸ ಮಾಡಿದ ಮತ್ತು ಬ್ಯಾಂಕ್‌ಗಳನ್ನು ಮುಚ್ಚಿ ಠೇವಣಿದಾರರಿಗೆ ಖಾಯಂ ಆಗಿ ವಂಚಿಸಿರುವ ಎಷ್ಟು ಪ್ರಕರಣಗಳು ಕಳೆದ ಮೂರು ವರ್ಷಗಳಲ್ಲಿ ದಾಖಲಿಸಲ್ಪಟ್ಟಿವೆ ; ಅಂಥ ಸಹಕಾರಿ ಬ್ಯಾಂಕ್‌ಗಳ ಮೇಲೆ ಕೈಗೊಂಡ ಕ್ರಮಗಳೇನು;

(ಇ) ಸಹಕಾರಿ ಕಾನೂನು ಕಟ್ಟಳೆಗಳಲ್ಲಿ ಖಾತೆದಾರರ ಹಣಕ್ಕೆ ಖಾತರಿ ಒದಗಿಸಿಕೊಡುವ ಯಾವ ಯಾವ ಕಾನೂನುಗಳು ಜಾರಿಯಲ್ಲಿವೆ; ಪ್ರಸ್ತುತ ಇರುವ ಕಾನೂನು ನಿಯಮಗಳನ್ನು ಗಾಳಿಗೆ ತೂರಿ ಖಾತೆದಾರರಿಗೆ ವಂಚಿಸುವುದನ್ನು ತಪ್ಪಿಸುವ ನಿಟ್ಟಿನಲ್ಲಿ ಇಲಾಖೆಯು ಕೈಗೊಳ್ಳುವ ಕ್ರಮಗಳೇನು ?